## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2063
ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸುವ ದಿನಾಂಕ : 27.03.2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯತಿಗಳಲ್ಲಿ ದಿನಗೂಲಿ ಹಾಗೂ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ನೌಕರರ ಸಂಖ್ಯೆ ಎಷ್ಟು; | ಗ್ರಾಮ ಪಂಚಾಯತಿಗಳಲ್ಲಿ ದಿನಗೂಲಿ ಹಾಗೂ ಗುತ್ತಿಗೆ ಆಧಾರದ ಮೇಲೆ ನೌಕರರು ಕರ್ತವ್ಯ ನಿರ್ವಹಿಸುತ್ತಿರುವುದಿಲ್ಲ. |
| (ಆ) | ಸದರಿಯವರನ್ನು ನೇಮಕ ಮಾಡಿಕೊಳ್ಳುವಾಗ ಅನುಸರಿಸಿರುವ ಮಾನದಂಡಗಳೇನು ಹಾಗೂ ಇವರಿಗೆ ನೀಡಲಾಗುತ್ತಿರುವ ಮಾಸಿಕ ಗೌರವ ಧನ/ವೇತನದ ಮೊತ್ತವೆಷ್ಟು; | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ 112 ರಡಿ ಸರ್ಕಾರವು ಆದೇಶದ ಮೂಲಕ ಗ್ರಾಮ ಪಂಚಾಯತಿಗೆ ಸಂಬಂಧಿಸಿದಂತೆ ಗ್ರಾಮ ಪಂಚಾಯತಿ ಸಿಬ್ಬಂದಿ ವರ್ಗದ ಮಾದರಿ, ನೇಮಕಾತಿ ವಿಧಾನ ಮತ್ತು ವೇತನ ಶ್ರೇಣಿ ನಿಗದಿಪಡಿಸಿದ್ದು, ಅದರಂತೆ ಗ್ರಾಮ ಪಂಚಾಯತಿಗಳು ಪ್ರಕರಣ 113 ರಂತೆ ತನ್ನ ನೌಕರರನ್ನು ನೇಮಿಸಿಕೊಂಡು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಅನುಮೋದನೆ ಪಡೆಯಬೇಕಾಗಿರುತ್ತದೆ.<br><br>ಗ್ರಾಮ ಪಂಚಾಯಿತಿ ನೌಕರರಿಗೆ ಕಾರ್ಮಿಕ ಇಲಾಖೆಯು ಕಾಲಕಾಲಕ್ಕೆ ನಿಗದಿಪಡಿಸುವ ಕನಿಷ್ಠ ವೇತನವನ್ನು ನೀಡಲಾಗುತ್ತಿದೆ. ಪ್ರಸ್ತುತ ನೀಡುತ್ತಿರುವ ಕನಿಷ್ಠ ವೇತನದ ವಿವರ ಈ ಕೆಳಕಂಡಂತಿದೆ. |

| ಕ್ರ ಸಂ | ಸಿಬ್ಬಂದಿ ಪದನಾಮ | ಕಾರ್ಮಿಕ ಕಾಯ್ದೆ ಯನ್ವಯ ನೀಡಲಾಗುತ್ತಿರುವ ಕನಿಷ್ಠ ಮಾಸಿಕ ವೇತನ (ರೂಗಳಲ್ಲಿ) |
|---|---|---|
| 1 | ಕರ ವಸೂಲಿಗಾರ | 13397 |
| 2 | ಕ್ಲರ್ಕ್, ಕ್ಲರ್ಕ್ ಕಂ ಡಾಟಾ ಎಂಟ್ರಿ ಆಪರೇಟರ್ | 13397 |
| 3 | ವಾಟರ್‌ಮೆನ್/ ಪಂಪ್ ಆಪರೇಟರ್ | 11863 |
| 4 | ಜವಾನ | 11285 |
| 5 | ಸ್ವಚ್ಛತಾಗಾರ | 14145 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಇ) | ಇವರನ್ನು ಸಕ್ರಮಗೊಳಿಸಲು ಸರ್ಕಾರ ಚಿಂತಿಸಿದೆಯೇ; ಯಾವ ಕಾಲಮಿತಿಯಲ್ಲಿ ಸಕ್ರಮಗೊಳಿಸಲಾಗುವುದು? | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993 ರ ಪ್ರಕರಣ ಪ್ರಕರಣ 113 ರಂತೆ ಗ್ರಾಮ ಪಂಚಾಯತಿಗಳು ತನ್ನ ನೌಕರರನ್ನು ನೇಮಿಸಿಕೊಂಡು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಅನುಮೋದನೆ ಪಡೆದ ನೌಕರರು ಗ್ರಾಮ ಪಂಚಾಯತಿಯ ನೌಕರರಾಗಿರುತ್ತಾರೆ. |

ಸಂ. ಗ್ರಾಅಪ 334 ಗ್ರಾಪಂಅ 2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು